# ಶ್ರೀ ಸ ರ ಸ್ವ ತೀ ದೇ ವಿ

ಶಾರದಾ ಭವವಾರಾಶೇಃ ಪಾರದಾ ವರದಾ ಸತಾಮ್ ।
ನೀರದಾಭಹರೇರ್ಜ್ಞಾನಸಾರದಾ ಪಾತು ಸರ್ವದಾ ॥

ಸಂಸಾರಸಮುದ್ರವನ್ನು ದಾಟಿಸುವ, ಸಜ್ಜನರಿಗೆ ವರಪ್ರದಳಾದ, ಮೇಘಶ್ಯಾಮನಾದ ಶ್ರೀಹರಿಯ ಉತ್ತಮವಾದ ಜ್ಞಾನವನ್ನು ಭಕ್ತರಿಗೆ ಕೊಡುವ ಶಾರದೆಯು ಯಾವಾಗಲೂ ಸಜ್ಜನರನ್ನು ಕಾಪಾಡಲಿ.

( ಸ ರ ಸ ಭಾ ರ ತೀ ವಿ ಲಾ ಸಃ : ಶ್ರೀ ವಾ ದಿ ರಾ ಜ ರು )

ಚತುರವದನನ ರಾಣಿಯತಿರೋ-
ಹಿತ ವಿಮಲ ವಿಜ್ಞಾನಿ ನಿಗಮ
ಪ್ರತತಿಗಳಿಗಭಿಮಾನಿ ವೀಣಾಪಾಣಿ ಬ್ರಹ್ಮಾಣಿ
ನುತಿಸಿ ಬೇಡುವೆ ಜನನಿ ಲಕುಮೀ
ಪತಿಯ ಗುಣಗಳ ತುತಿಪುದಕೆ ಸ-
ನ್ಮತಿಯ ಪಾಲಿಸಿ ನೆಲೆಸು ನೀಮದ್ವದನಸದನದಲಿ
( ಶ್ರೀ ಹ ರಿ ಕ ಥಾ ಮೃ ತ ಸಾ ರ – ಮ ಂ ಗ ಳಾ ಚ ರ ಣ ಸ ಂ ಧಿ)

**Janani – hey, mother , Chaturavadanana raani – She is the wife of Chaturmukha brahma, atirohita vimala vijnaani – she has nirmala, never losting jnaana, nigama pratatiga**

**Ligabhimaani – she is the abhimani for vedagalu, veenaapaani – she has the veena by name Kachchapi , brahmaani – she knows all the Vedaas, natisi – I will do namaskara to you - tutipudake – for having done the stotra on you Sanmatiya – give us subuddhi, madhvadana sadanadali – stay in my tongue**

**ವಾಗಭಿಮಾನಿನಿಯಾದ ಸರಸ್ವತೀದೇವಿಯನ್ನು ಜಗನ್ನಾಥದಾಸರು ಸ್ತೋತ್ರ ಮಾಡುವರು. ಬ್ರಹ್ಮದೇವರ ಪತ್ನಿಯಾದ ಸರಸ್ವತೀದೇವಿಯು ನಿರ್ಮಲವಾದ, ಕುಂಠಿತವಲ್ಲದ, ವಿಶಿಷ್ಠವಾದ ಜ್ಞಾನವುಳ್ಳವಳು, ಮತ್ತು ವೇದಗಳ ಸಮೂಹಕ್ಕೆ ಅಭಿಮಾನಿಯು. ಅವಳ ಕೈಯಲ್ಲಿ ಕಚ್ಚಪೀ ಎಂಬ ವೀಣೆಯನ್ನು ಧರಿಸಿರುವಳು. ಅವಳು ಸಕಲವೇದಗಳನ್ನೂ ತಿಳಿದವಳು. ಅಂತಹ ತಾಯಿಯಾದ ಸರಸ್ವತಿಯು ನಮಗೆ ಸನ್ಮತಿಯ ಕೊಟ್ಟು ನನ್ನ ನಾಲಿಗೆಯಲ್ಲಿ ನೆಲೆಸಲಿ**

ರಾ ಗ – ವ ಸಂ ತ : ತಾ ಳ – ಆ ದಿ ತಾ ಳ

ಕೊಡು ಬೇಗ ದಿವ್ಯಮತಿ ಸರಸ್ವತಿ । ಪ ।

ಮೃಡಹರಿಹಯ ಮುಖರೊಡೆಯಳೆ ನಿನ್ನಯ
ಅಡಿಗಳಿಗೆರಗುವೆ ಅಮ್ಮ ಬ್ರಹ್ಮನ ರಾಣಿ । ಅ ಪ ।
ಇಂದಿರಾರಮಣನ ಹಿರಿಯ ಸೊಸೆಯು ನೀನು
ಬಂದೆನ್ನ ವದನದಿ ನಿಂದು ನಾಮವ ನುಡಿಸೆ । ೧ ।

ಅಖಿಳ ವಿದ್ಯಾಭಿಮಾನಿ ಅಜನ ಪಟ್ಟದರಾಣಿ
ಸುಖವಿತ್ತು ಪಾಲಿಸೆ ಸುಜನಶಿರೋಮಣಿ । ೨ ।
ಪತಿತ ಪಾವನೆ ನೀ ಗತಿಯೆಂದು ನಂಬಿದೆ
ವಿತತ ಪುರಂದರವಿಟ್ಠಲನ ತೋರೆ । ೩ ।

ರಾಗ – ಆರಭಿ : ತಾಳ – ಝಂಪೆತಾಳ

ವಾಣಿ ಪರಮಕಲ್ಯಾಣಿ ನಮೋ ನಮೋ ಅಜನ
ರಾಣಿ ಪಂಕಜಪಾಣಿ । ಪ ।

ಭಳಿರೆ ಭಳಿರೆ ಅಂಬೆ ಭಕ್ತಜನ ಸುಖದಂಬೆ
ಸುಳಿದಾಡು ಶುಭನಿತಂಬೆ ಅಮ್ಮ ನಿಮ್ಮ
ಹೊಳೆಹೊಳೆವ ಮುಖ ಮುಕುರ ಬಿಂಬೆ
ಇಳೆಯೊಳಗೆ ಸರಿಗಾಣೆ ಶಾರದಾಂಬೆ ಪುತ್ಥಳಿ ಬೊಂಬೆ । ೧ ।

ಶರಣು ಶರಣೆಲೆ ದೇವಿ ಸ್ಮರಣಮಾತ್ರದಿ ಕಾಯ್ವಿ
ಚರಣದಂದುಗೆಯ ಠೀವಿ ನಳನಳಿಸುವಾ
ಭರಣಗಳನಿಟ್ಟು ಸುಖವೀವಿ
ಧರೆಯೊಳಗೆ ಹರಿಣಾಕ್ಷಿ ನೀ ಸಲಹೆ ವಾಗ್ದೇವಿ । ೨ ।

ಜಯ ಜಯತು ಜಗನ್ಮಾತೆ ಜಗದೊಳಗೆ ಪ್ರಖ್ಯಾತೆ
ದಯಮಾಡು ಧವಳಗೀತೆ ಸತತ ಶ್ರೀ
ಹಯವದನಪದಕೆ ಪ್ರೀತೆ ಇಳೆಯೊಳಗೆ
ನಯದಿ ಗೆಲಿಸೆನ್ನ ಮಾತೆ ವಿಧಿಕಾಂತೆ । ೩ ।

ರಾ ಗ – ಬಾ ಗೇ ಶ್ರೀ : ತಾ ಳ – ಝಂ ಪೆ ತಾ ಳ

ಜಯ ಜಯ ಸರಸ್ವತಿ ಜಯವರ ಪೂರಣಮತಿ
ತ್ರಯಲೋಕ್ಯದಲಿ ಖ್ಯಾತಿ ಜಯ ಸುಕೀರ್ತಿ | ಧ್ರುವ |
ವಿದ್ಯಾವರದಾಯಿನಿ ಸಿದ್ಧಿಗೆ ಶಿಖಾಮಣಿ
ಬುದ್ಧಿ ಪ್ರಕಾಶಿನಿ ಸದ್ಭೂಷಿಣಿ | ೧ |
ಕರಕಮಲದಲಿ ವೀಣೆ ಸುರಸ ಅಮೃತವಾಣಿ
ವರವಿದ್ಯದಲಿ ದಾನಿ ಸುಪ್ರವೀಣೆ | ೨ |
ಪ್ರಸನ್ನವದನಿ ವಿಶ್ವದಲಿ ನೀ ಪೂರ್ಣೆ
ಹಂಸವಾಹಿನಿ ಪೂರ್ಣೆ ಸ್ವಸಿದ್ಧಿಣಿ | ೩ |
ಸದಾ ಸದ್ಗುರುಸ್ತುತಿ ಒದುಗುವ್ಹಾಂಗ ಸ್ಫೂರ್ತಿ
ಇದೇ ಮಹಿಪತಿ ಕುರ್ತಿ ಬೋಧಿಸು ಮತಿ | ೪ |

Collection by Narahari Sumadhwa
For www.sumadhwaseva.com